ಕುಲದಿಂದ ಮುನ್ನೇನಾದಿರಿಂಭೋ. ಸಾಕ್ಷಾದಗಸ್ತ್ಯ ಕಬ್ಬಿಲಿಗ, ದೂರ್ವಾಸ ಮಚ್ಚಿಗ, ಕಶ್ಯಪ ಕಮ್ಮಾರ, ಕೌಂಡಿಲ್ಯನೆಂಬ ಋಷಿ ಮೂರು ಲೋಕವರಿಯಲು ನಾಯಿದ ಕಾಣಿರೋ. ನಮ್ಮ ಕೂಡಲಸಂಗನ ವಚನವಿಂತೆಂದುದು ಶ್ವಪಚೋಪಿಯಾದರೇನು, ಶಿವಭಕ್ತನೇ ಕುಲಜನೆಂಬೋ.

೩. ಸಂಕಲ್ಪ ವಿಕಲ್ಪವೆಂಬ ಉದಯಾಸ್ತ ಮಾನಗಳಿಗೆ ದೂರವಾದ ಶಿವಶರಣರು ಅಕುಲಜರೆಂದು ಗಳಹುತ್ತಿಪ್ಪರು ನೋಡಾ! ಈ ಮರುಳು ವಿಪ್ರರು ತಾವು ಮಾತಂಗಿಯ ಗರ್ಭಸಂಭವ ಜ್ಯೇಷ್ಠ ಪುತ್ರರೆಂಬುದನರಿಯದೆ, ನಮ್ಮ ಶಿವಭಕ್ತರನು ಅಂತಹ ಕುಲ, ಇಂತಹ ಕುಲದವರೆಂದು ನಿಂದಿಸಿ ನುಡಿವ ವಿಪ್ರಹೊಲೆಯರು ನೀವು ಕೇಳಿ ಭೋ. ಅದೆಂತೆಂದೊಡೆ॥ ಸ್ತ್ರೀವಾಥ ಪುರುಷಸ್ಪಂಡೊ ಚಾಂಡಾಲೋ ದ್ವಿಜವಂಶಜಃ । ನ ಜಾತಿಭೇದೋ ಲಿಂಗಾರ್ಚನೇ ಸರ್ವೆರುದ್ರಗಣಾ ಸ್ಮೃತಾಃ॥ ಇಂತೆಂಬ ಪುರಾಣವಾಕ್ಯಗಳನರಿದು, ನಮ್ಮ ಶಿವಭಕ್ತರನು ಹೊಲೆಯ, ಮಾದಿಗ, ಕಬ್ಬಿಲ, ಕಮ್ಮಾರ, ಕಂಚುಗಾರ, ಅಕ್ಕಸಾಲೆ, ಕುಂಬಾರ, ಅಸಗ, ನಾವಿಂದ, ಜೇಡ ಬೇಡನೆಂದು ನುಡಿವುತ್ತಿಪ್ಪಿರಿ. ನಿಮ್ಮ ಉತ್ತಮ ಸತ್ಕುಲಂಗಳ ನಾವು ಎತ್ತಿ ನುಡಿಯ ಬಹುದೇ ಎಮಗೆ? ಅದೇಕೆಂದೊಡೆ, ಮಾರ್ಕಂಡೇಯ ಮಾದಿಗನೆಂದು, ಸಾಂಖ್ಯ ಶ್ವಪಚನೆಂದು, ಕಶ್ಯಪ ಕಮ್ಮಾರನೆಂದು, ರೋಮಜ ಕಂಚುಗಾರನೆಂದು, ಅಗಸ್ತ್ಯ ಕಬ್ಬಿಲನೆಂದು, ವ್ಯಾಸ ಬೇಡನೆಂದು, ವಸಿಷ್ಠ ಡೊಂಬನೆಂದು, ದುರ್ವಾಸ ಮುಚ್ಚಿಗನೆಂದು, ಕೌಂಡಿಲ್ಯ ನಾವಿಂದನೆಂದು, ಅದೆಂತೆಂದೊಡೆ, ವಾಸಿಷ್ಠದಲ್ಲಿ, ವಾಲ್ಮೀಕೀಚವಶಿಷ್ಠಶ್ಚಾಗಸ್ತ್ಯ ಮಾಂಡವ್ಯ ಗೌತುಮಾಃ ಪೂರ್ವಾಶ್ರಯೇ ಕನಿಷ್ಠಾ ಸುದೀಕ್ಷಯಾ ಸ್ವರ್ಗಗಾಮಿನಃ॥ ಎಂದುದಾಗಿ ಇವನರಿದು ಮರೆದಿರಿ ನಿಮ್ಮ ಕುಲವನು. ಇನ್ನು ನಿಮ್ಮ ಕುಲದಲ್ಲಿ ಹಿರಿಯರುಳ್ಳರೇ, ನೀವು ಹೇಳಿ ಭೋ. ನಿಮ್ಮ ಗೋತ್ರವ ನೋಡಿ, ನಿಮ್ಮ ಹಮ್ಮುಬಿಡಿ ಭೋ. ಎಮ್ಮ ಶಿವಭಕ್ತರೇ ಕುಲಜರು. ಇದ ನಂಬಿದಿರ್ದಡೆ, ಓದಿ ನೋಡಿರಣ್ಣಾ ನಿಮ್ಮ ವೇದವರ್ಗಂಗಳೊಳಗೆ. ಅದೆಂತೆಂದೊಡೆ, ಅಥರ್ವಣವೇದದಲ್ಲಿಃ—"ಮಾತಂಗೀ ರೇಣುಕಾಗರ್ಭ ಸಂಭವಾತ್ ಇತಿ ಕಾರುಣ್ಯಮೇಧಾವೀ ರುದ್ರಾಕ್ಷಿಣಾ ಲಿಂಗಧಾರಣಸ್ಯ ಪ್ರಸಾದಂ ಸ್ವೀಕುರ್ವನ್ ಋಷೀಣಾಂ ವರ್ಣಶ್ರೇಷ್ಠೋಘೋರ ಋಷಿ ಸಂಕರ್ಷಣಾತ್ ವೇದ ಬ್ರುವತಿ" "ಇತ್ಯಾದಿ ವೇದವಚನಶೃತಿ ಮಾರ್ಗೇಣ" ಎಂದುದಾಗಿ, ಮತ್ತಂ ವಾಯುವೀಯ

ಸಂಹಿತಾಯಾಂ "ಬ್ರಾಹ್ಮಣೋಪಿ ಚಾಂಡಾಲೋ ದುರ್ಗುಣಸ್ಸುಗುಣೋ ಪಿವಾ। ಭಸ್ಮ ರುದ್ರಾಕ್ಷ ಕಂಠೆ ವಾ ದೇಹಾಯಾಂ ಸ ಶಿವಂ ವ್ರಜೇತ್" ಎಂದುದಾಗಿ ಮತ್ತಂ, ಶಿವರಹಸ್ಯದಲ್ಲಿ "ಗ್ರಾಮೇಣ ಮಲಿನಂ ತೋಯಂ ಯಥಾ ಸಾಗರಂ ಗತಂ। ಶಿವ ಸಂಸ್ಕಾರ ಸಂಪನ್ನಂ ಜಾತಿಭೇದಂ ನ ಕಾರಯೇತ್" ಎಂದುದಾಗಿ, ಇವರೆಲ್ಲರ ವರ್ಣಂಗಳು ಲಿಂಗಾರಾಧನೆಯಿಂದ ಮರಸಿ ಹೋದವು ಕೇಳಿರಣ್ಣಾ. ಇಂತಪ್ಪ ಋಷಿಜನಂಗಳೆಲ್ಲ ಶ್ರೀಗುರುವಿನ ಕಾರುಣ್ಯವಂ ಪಡೆದು, ವಿಭೂತಿ ರುದ್ರಾಕ್ಷಿಯಂ ಧರಿಸಿ, ಶಿವಲಿಂಗಾರ್ಚನೆಯಂ ಮಾಡಿ, ಪಾದ ತೀರ್ಥ ಪ್ರಸಾದಮಂ ಕೊಂಡು, ಉತ್ತಮ ವರ್ಣ ಶ್ರೇಷ್ಠರಾದರು ಕಾಣಿರೋ. ಇದು ಕಾರಣ ನಮ್ಮ ಕೂಡಲ ಸಂಗಯ್ಯನ ಅರಿದು ಪೂಜಿಸುವಾತನೇ ಉತ್ತಮ ಸದ್ಬ್ರಾಹ್ಮಣನು, ಅರಿಯದವನೀಗಳೇ ಕೆಟ್ಟ ಹೊಲೆಯ ಕಾಣಿರಣ್ಣಾ.

---

## ೭ ಭಕ್ತರು ಕುಲದಭಿಮಾನವನ್ನು ಬಿಡುವುದು.

೧. ಉತ್ತಮ ಕುಲದಲ್ಲಿ ಹುಟ್ಟಿದೆನೆಂಬ ಕಷ್ಟತನದ ಹೊರೆಯ ಹೊರಿಸಿದರಯ್ಯ. ಕಕ್ಕಯ್ಯ ನೊಕ್ಕುದನಿಕ್ಕ ನೋಡಯ್ಯ. ದಾಸಯ್ಯ ಶಿವದಾನವನೆರೆಯ ನೋಡಯ್ಯ. ಮನ್ನಣೆಯ ಚನ್ನಯ್ಯನೆನ್ನುವ ಮನ್ನಿಸ. ಉನ್ನತ ಮಹಿಮ ಕೂಡಲಸಂಗಮದೇವಾ ಶಿವಧೋ ಶಿವಧೋ.

೨. ಸೆಟ್ಟಿ ಎಂಬೆನೆ ಸಿರಿಯಾಳನ? ಮಡಿವಾಳನೆಂಬೆನೆ ಮಾಚಯ್ಯನ? ಡೋಹರನೆಂಬೆನೆ ಕಕ್ಕಯ್ಯನ? ಮಾದಾರನೆಂಬೆನೆ ಚನ್ನಯ್ಯನ? ಆನು ಹಾರುವನೆಂದಡೆ, ಕೂಡಲಸಂಗಯ್ಯ ನಗುವನಯ್ಯ.

೩. ಅಪ್ಪನು ಡೋಹರ ಕಕ್ಕಯ್ಯನಾಗಿ, ಮುತ್ತೈಯ್ಯ ಚನ್ನಯ್ಯನಾದರೆ ಆನು ಬದುಕುವೆನು. ಮತ್ತಾ ಶ್ವಪಚಯ್ಯನ ಸನ್ನಿಧಿಯಿಂದ ಭಕ್ತಿಯ ಸದ್ಗುಣವ ನಾನು ಅರಿದೆನಯ್ಯ. ಕಷ್ಟಜಾತಿ ಜನ್ಮದಲ್ಲಿ ಜನಿಸಿದೆ. ಎನಗಿದು ವಿಧಿಯೇ ಕೂಡಲಸಂಗಮದೇವಾ?

೪. ಹರನು ಮೂಲಿಗನಾಗಿ, ಪುರಾತನರೊಳಗಾಗಿ, ಬಳಿಬಳಿಯಲು ಬಂದ ಮಾದಾರನ ಮಗ ನಾನಯ್ಯ. ಕಳೆದ ಹೊಲೆಯ ನಮ್ಮಯ್ಯ

ಜಾತಿಸೂತಕ. ಮಾದಾರನ ಮಗ ನಾನಯ್ಯ. ಪನ್ನಗ ಭೂಷಣ ಕೂಡಲಸಂಗಯ್ಯ, ಚನ್ನಯ್ಯ ಎನ್ನ ಮುತ್ತಯ್ಯನಜ್ಜನಪ್ಪನಯ್ಯ.

೫. ಅಪ್ಪನು ನಮ್ಮ ಮಾದಾರ ಚನ್ನಯ್ಯ. ಬೊಪ್ಪನು ನಮ್ಮ ಡೋಹರ ಕಕ್ಕಯ್ಯ. ಚಿಕ್ಕಯ್ಯನೆಮ್ಮಯ್ಯ, ಕಾಣಿರಯ್ಯ. ಅಣ್ಣನು ನಮ್ಮ ಕಿನ್ನರಿ ಬೊಮ್ಮಯ್ಯ. ಎನ್ನನೇತಕ್ಕರಿಯಿರಿ ಕೂಡಲಸಂಗಮದೇವಯ್ಯ?

೬. ಭಕ್ತಿ ಇಲ್ಲದ ಬಡವ ನಾನಯ್ಯ. ಕಕ್ಕಯ್ಯನ ಮನೆಯಲ್ಲು ಬೇಡಿದೆ. ದಾಸಯ್ಯನ ಮನೆಯಲ್ಲು ಬೇಡಿದೆ. ಚನ್ನಯ್ಯನ ಮನೆಯಲ್ಲು ಬೇಡಿದೆ. ಎಲ್ಲ ಪುರಾತನರು ನೆರೆದು ಭಕ್ತಿಭಿಕ್ಷವನಿಕ್ಕಿದರೆ, ಎನ್ನ ಪಾತ್ರೆ ತುಂಬಿತ್ತು, ಕೂಡಲಸಂಗಮದೇವಾ.

---

## ಪಂಚಸೂತಕಗಳಿಲ್ಲ.

೧. ಜಾತಿಸೂತಕ ಬಿಡದು. ಜನನಸೂತಕ ಬಿಡದು. ಪ್ರೇತಸೂತಕ ಬಿಡದು. ರಜಸೂತಕ ಬಿಡದು. ಎಂಜಲಸೂತಕ ಬಿಡದು. ಕುಲಸೂತಕ ಬಿಡದು. ಇವರನೆಂತು ಭಕ್ತರೆಂಬೆ? ಇವರನೆಂತು ಯುಕ್ತರೆಂಬೆ? ಶ್ರೀಗುರುಸ್ವಾಮಿ ಶಿಷ್ಯನ ಪೂರ್ವಾಶ್ರಯವ ಕಳೆದು, ಹಸ್ತಮಸ್ತಕ ಸಂಯೋಗಮಂ ಮಾಡಿ, ಉಪದೇಶವನಿತ್ತ ಬಳಿಕ ಕಾಡಗಿಚ್ಚಿನ ಕೈಯ್ಯಲ್ಲಿ ಕರಡವ ಕೊಯಿಸಿದಂತಿರಬೇಕು ಭಕ್ತನು. ಹಿಂದೆ ಮುಂದೆ ನಿಲವಿಲ್ಲ. ಇದು ಕಾರಣ ಕೂಡಲ ಚನ್ನಸಂಗಮದೇವಯ್ಯ ಸದ್ಭಕ್ತಂಗೆ ಸೂತಕವ ಮಾಡಲಿಲ್ಲ.

೨. ಉಪಾಧಿಯನಳಿದು, ನಿರುಪಾಧಿಯ ತಿಳಿದು, ಸಹಜಮಾಟದಲ್ಲಿ ಸುಳಿದು, ಜಾತಿಸೂತಕ ಜನನಸೂತಕ ಪ್ರೇತಸೂತಕ ಉಚ್ಛಿಷ್ಟಸೂತಕ ರಜಸೂತಕವೆಂಬ ಪಂಚಸೂತಕಂಗಳ ಕಳೆದು, ಸದಾಚಾರ ಲಿಂಗಾಚಾರ ಶಿವಾಚಾರ ಗಣಾಚಾರ ಭೃತ್ಯಾಚಾರವೆಂಬ ಪಂಚಾಚಾರಗಳಿಂ ಪಂಚಭೂತಗಳ ಪರಿಹರಿಸಿ, ಪಂಚಪ್ರಾಣವಾಯುಗಳ ಸಂಚಲಗುಣವಳಿದು, ಪಂಚೇಂದ್ರಿಯಂಗಳಲ್ಲಿ ಪಂಚಲಿಂಗ ಪ್ರತಿಷ್ಠಿಸಿ, ಪಂಚ

ಬ್ರಹ್ಮದ ಮೂಲವಳಿಯನರಿದು, ಮೂಲೋಕದೊಡೆಯನಲ್ಲಿ ಮನವನಡಗಿರ್ಪ ಮಹಾಶರಣರ ಪಾದಕ್ಕೆ ನಮೋ ನಮೋ ಎಂಬೆನಯ್ಯ ಅಖಂಡೇಶ್ವರಾ.

೩. ಹೊಲೆಯುಂಟೇ ಲಿಂಗವಿದ್ದೆಡೆಯಲ್ಲಿ? ಕುಲವುಂಟೇ ಜಂಗಮವಿದ್ದೆಡೆಯಲ್ಲಿ? ಎಂಜಲುಂಟೇ ಪ್ರಸಾದವಿದ್ದೆಡೆಯಲ್ಲಿ? ಅಪವಿತ್ರದ ನುಡಿಯ ನುಡಿವ ಸೂತಕವೇ ಪಾತಕ. ನಿಃಕಳಂಕ ನಿಜೈಕ್ಯ ತ್ರಿವಿಧ ನಿರ್ಣಯ ಕೂಡಲಸಂಗಮದೇವಾ ನಿಮ್ಮ ಶರಣಂಗಲ್ಲದಿಲ್ಲ.

೪. ಲಿಂಗದಲ್ಲಿ ಸೂತಕವ ಹಿಡಿವನ್ನಕ್ಕ, ಪ್ರಾಣಲಿಂಗ ಸಂಬಂಧಿ ಎಂತೆಂಬೆ? ಜಂಗಮವಿದ್ದೆಡೆಯಲ್ಲಿ ಸೂತಕವ ಹಿಡಿವನ್ನಕ್ಕ ಅನುಭಾವ ಸಂಬಂಧಿ ಎಂತೆಂಬೆ? ಪ್ರಸಾದದಲ್ಲಿ ಸೂತಕವ ಹಿಡಿವನ್ನಕ್ಕ ಸ್ವಾಮಿ ಭೃತ್ಯ ಸಂಬಂಧಿ ಎಂತೆಂಬೆ? ಭಕ್ತನೆಂತೆಂಬೆ? ಪ್ರಸಾದಿ ಎಂತೆಂಬೆ? ಕೂಡಲಚನ್ನಸಂಗನ ಶರಣನೆಂತೆಂಬೆ?

೫. ಶ್ರೀಗುರು ಕಾರುಣ್ಯ ಕಟಾಕ್ಷದಲ್ಲಿ ಉತ್ಪತ್ಯವಾದ ಅಜಾತಂಗೆ ಜಾತಿಸೂತಕವಿಲ್ಲ, ಜನನಸೂತಕವಿಲ್ಲ, ಪ್ರೇತಸೂತಕವಿಲ್ಲ, ರಜಸೂತಕವಿಲ್ಲ, ಎಂಜಲಸೂತಕವಿಲ್ಲ. ಉಂಟೆಂಬವಂಗೆ ಗುರುವಿಲ್ಲ, ಲಿಂಗವಿಲ್ಲ, ಜಂಗಮವಿಲ್ಲ, ಪ್ರಸಾದವಿಲ್ಲವಯ್ಯ ಕೂಡಲಚನ್ನಸಂಗಯ್ಯ.

